# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 1561 |
| ಉತ್ತರಿಸುವ ದಿನಾಂಕ | 18–03–2020 |
| ಮಾನ್ಯ ಸದಸ್ಯರ ಹೆಸರು | ಶ್ರೀ ಎಸ್.ರವಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| ಉತ್ತರಿಸುವ ಸಚಿವರು | ಕಂದಾಯ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ಆಸ್ತಿ ನೋಂದಣಿ ವೇಳೆ ಅಕ್ರಮಗಳನ್ನು ತಡೆಗಟ್ಟುವ ಸಲುವಾಗಿ ಉಪ ನೋಂದಣಿ ಕಛೇರಿಗಳಲ್ಲಿ ಸರ್ಕಾರ ಜಾರಿಗೆ ತಂದಿರುವ ಒಟಿಪಿ ವ್ಯವಸ್ಥೆ ಗಮನಾರ್ಹವಾದದ್ದು: ಇಂತಹ ವ್ಯವಸ್ಥೆಯಿಂದ ಜನರು ಒಂದು ನೋಂದಣಿಗೆ ಎರಡು ತಾಸಿಗೂ ಅಧಿಕ ಸಮಯ ಕಾಯುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; (ವಿವರ ನೀಡುವುದು) | ರಾಜ್ಯದಲ್ಲಿ ವ್ಯವಹಾರ ಸರಳೀಕರಣಗೊಳಿಸುವ (Ease of Doing Business) ನಿಟ್ಟಿನಲ್ಲಿ ದಸ್ತಾವೇಜು ನೋಂದಾಯಿಸುವಾಗ ಸರಿಯಾದ ಪಕ್ಷಕಾರರನ್ನು ಗುರುತಿಸಲು ಹಾಗೂ ಮೋಸದ ನೋಂದಣಿ ಮತ್ತು impersonation ಆಗುವುದನ್ನು ತಡೆಯಲು ಮೊಬೈಲ್ ನಂಬರ್ ಮೂಲಕ ಓ.ಟಿ.ಪಿ (One Time Password) ಪಡೆದು, ಅದನ್ನು ಪ್ರಮಾಣೀಕರಿಸುವ ಉದ್ದೇಶಕ್ಕಾಗಿ ಓ.ಟಿ.ಪಿ ವ್ಯವಸ್ಥೆ ಜಾರಿಗೊಳಿಸಲಾಗಿರುತ್ತದೆ. ಈ ರೀತಿಯಾಗಿ ಜಾರಿಗೆ ತಂದಿರುವ ಓ.ಟಿ.ಪಿ ವ್ಯವಸ್ಥೆಯಿಂದ ಜನರು ನೋಂದಣಿಗಾಗಿ ಕಾಯುತ್ತಿರುವುದಿಲ್ಲ. |
| ಆ | ಈ ಪ್ರಕ್ರಿಯೆ ಬಂದ ನಂತರ ನೋಂದಣಿಗಳು ಜಾಸ್ತಿಯಾಗಿವೆಯೇ ಅಥವಾ ಕಡಿಮೆಯಾಗಿದೆಯೆ; (ವಿವರ ನೀಡುವುದು) | ರಾಜ್ಯದ ಉಪ ನೋಂದಣಿ ಕಛೇರಿಗಳಲ್ಲಿ ನೋಂದಣಿ ಕಾರ್ಯವು ಸರಾಗವಾಗಿ ನಡೆಯುತ್ತಿದೆ. ನೋಂದಣಿಯಾಗಿರುವ ದಸ್ತಾವೇಜುಗಳು ವಿವರವನ್ನು ಅನುಬಂಧದಲ್ಲಿ ನೀಡಲಾಗಿದೆ. |
| ಇ | ಒಂದು ನೋಂದಣಿ ಮಾಡಿಸಲು ಕಛೇರಿಗೆ ನೀಡಿದರೆ 15 ದಿನಗಳ ನಂತರ ನೋಂದಣಿ ಮಾಡುವುದಾಗಿ ಮುಂದಿನ ದಿನಾಂಕಗಳನ್ನು ನೀಡಿ ವಾಪಸ್ ಕಳುಹಿಸಲಾಗುತ್ತಿರುವುದಕ್ಕೆ ಕಾರಣಗಳೇನು; | ರಾಜ್ಯದ ಉಪನೋಂದಣಿ ಕಛೇರಿಗಳಲ್ಲಿ ನೋಂದಣಿ ಕಾರ್ಯವು ಸರಾಗವಾಗಿ ನಡೆಯುತ್ತಿದೆ. ದಿನ ನಿತ್ಯ ಸುಮಾರು 8000 ದಸ್ತಾವೇಜುಗಳು ನೋಂದಣಿಯಾಗುತ್ತಿದೆ.<br><br>ನೋಂದಣಿ ಮಾಡಿಸಲು ಕಛೇರಿಗೆ ಭೇಟಿ ನೀಡಿದವರಿಗೆ ನೋಂದಣಿಗೆ ಅಂದೇ ಅವಕಾಶ ಕಲ್ಪಿಸಲಾಗುತ್ತಿದೆ. ಸಾರ್ವಜನಿಕರ ಅನುಕೂಲಕ್ಕಾಗಿ ಮತ್ತು ವರ್ಷಾಂತ್ಯದ ನೋಂದಣಿ ಒತ್ತಡ ಕಡಿಮೆ ಮಾಡಲು ದಸ್ತಾವೇಜುಗಳ ನೋಂದಣಿಗೆ ದಿನಾಂಕ:25–02–2020 ರಿಂದ ಜಾರಿಗೆ ಬರುವಂತೆ ಬೆಳಿಗ್ಗೆ 10.00 ರಿಂದ ಸಂಜೆ 05.30 ರವರೆಗೆ ನಿಗದಿಪಡಿಸಿರುವ ಅವಧಿಯನ್ನು ಬೆಳಿಗ್ಗೆ 09.00 ರಿಂದ ಸಂಜೆ 06.30 ರವರೆಗೆ ವಿಸ್ತರಿಸಲಾಗಿದೆ. |
| ಈ | ಹೊಸ ತಂತ್ರಾಂಶ ಅಳವಡಿಕೆಯಿಂದ ಸರಾಸರಿ 50% ನೋಂದಣಿ ವಿಳಂಬವಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ ಸರ್ಕಾರ ಕೈಗೊಂಡಿರುವ ಕ್ರಮಗಳೇನು: | |
| ಉ | ಈ ತಂತ್ರಾಂಶ ಅಳವಡಿಕೆಯಿಂದ ದಿನೇ ದಿನೇ ಸರ್ವರ್ ಸಮಸ್ಯೆಗಳಿಂದ ನೋಂದಣಿಗಳಾಗದೆ ಸಾರ್ವಜನಿಕರು ಪರದಾಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ನೋಂದಣಿ ಮತ್ತು ಮುದ್ರಾಂಕ ಇಲಾಖೆಯಲ್ಲಿ ದಸ್ತಾವೇಜುಗಳ ನೋಂದಣಿಯನ್ನು ಕಾವೇರಿ ತಂತ್ರಾಂಶದ ಮೂಲಕ ನಿರ್ವಹಿಸಲಾಗುತ್ತಿದೆ. ದಸ್ತಾವೇಜುಗಳ ನೋಂದಣಿ ಸಮಯದಲ್ಲಿ ಸ್ಥಿರಾಸ್ತಿ ಮತ್ತು ಮಾರಾಟಗಾರರ ವಿವರಗಳನ್ನು ಕೆಳಕಂಡಂತೆ ಸಂಬಂಧಪಟ್ಟ ಆಸ್ತಿಯ ತಂತ್ರಾಂಶದಿಂದ ಆನ್‌ಲೈನ್ ಮೂಲಕ ಪಡೆದು, ಪ್ರಮಾಣೀಕರಿಸಿಕೊಂಡು ದಸ್ತಾವೇಜುಗಳನ್ನು ನೋಂದಾಯಿಸಲಾಗುತ್ತದೆ.<br><br>• ಗ್ರಾಮ ಪಂಚಾಯತ್ ವ್ಯಾಪ್ತಿಯ ಸ್ಥಿರಾಸ್ಥಿಗಳಿಗೆ ಸಂಬಂಧಿಸಿದ ವಿವರಗಳನ್ನು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| | | ಇಲಾಖೆ ನಿರ್ವಹಿಸುತ್ತಿರುವ "ಇ–ಸ್ವತ್ತು" ತಂತ್ರಾಂಶದಿಂದ ಪಡೆಯಲಾಗುತ್ತದೆ.<br>• ಕೃಷಿ ಜಮೀನುಗಳಿಗೆ ಸಂಬಂಧಿಸಿದ ವಿವರಗಳನ್ನು ಭೂಮಿ ಮಾನಿಟರಿಂಗ್ ಸೆಲ್ ನಿರ್ವಹಿಸುತ್ತಿರುವ "ಭೂಮಿ" ತಂತ್ರಾಂಶದಿಂದ ಪಡೆಯಲಾಗುತ್ತದೆ.<br>• ನಗರ ಪ್ರದೇಶಗಳ ಸ್ಥಿರಾಸ್ತಿಗಳಿಗೆ ಸಂಬಂಧಿಸಿದ ವಿವರಗಳನ್ನು ನಗರಾಭಿವೃದ್ಧಿ ಇಲಾಖೆ ನಿರ್ವಹಿಸುತ್ತಿರುವ "ಇ–ಆಸ್ತಿ" ತಂತ್ರಾಂಶದಿಂದ ಪಡೆಯಲಾಗುತ್ತದೆ.<br>• ಬಿ.ಡಿ.ಎ. ವ್ಯಾಪ್ತಿಯ ನಿವೇಶನಗಳಿಗೆ ಸಂಬಂಧಿಸಿದ ವಿವರಗಳನ್ನು "ಬಿ.ಡಿ.ಎ. ಇ–ಖಾತಾ" ತಂತ್ರಾಂಶದಿಂದ ಪಡೆಯಲಾಗುತ್ತದೆ.<br>ದಸ್ತಾವೇಜುಗಳ ನೋಂದಣಿ ಸಮಯದಲ್ಲಿ ಮೇಲ್ಕಂಡ ತಂತ್ರಾಂಶಗಳಿಂದ ಸ್ತಿರಾಸ್ಥಿಗಳ ವಿವರಗಳನ್ನು ಆನ್‌ಲೈನ್ ಮೂಲಕ ಪಡೆಯಲು ಸಾಧ್ಯವಾಗದೇ ಇರುವ ಸಂದರ್ಭಗಳಲ್ಲಿ, ಇಂತಹ ದಸ್ತಾವೇಜುಗಳ ನೋಂದಣಿಯಲ್ಲಿ ಅಡಚಣೆ ಉಂಟಾಗುತ್ತದೆ. ಈ ರೀತಿ ಉಂಟಾದ ಅಡಚಣೆಗಳನ್ನು, ಸಂಬಂಧಿಸಿದ ತಂತ್ರಾಂಶ ನಿರ್ವಹಿಸುತ್ತಿರುವ ತಾಂತ್ರಿಕ ಸದಸ್ಯರ ಗಮನಕ್ಕೆ ತರಲಾಗುತ್ತದೆ. ಅವರಿಂದ ತಾಂತ್ರಿಕ ಸಮಸ್ಯೆಗಳನ್ನು ಪರಿಹರಿಸಿಕೊಂಡ ನಂತರ ಆನ್‌ಲೈನ್ ಮೂಲಕ ಸಂಬಂಧಿಸಿದ ತಂತ್ರಾಂಶದಿಂದ ಸ್ಥಿರಾಸ್ತಿಗಳ ವಿವರಗಳನ್ನು ಪಡೆದುಕೊಂಡು ದಸ್ತಾವೇಜುಗಳ ನೋಂದಣಿಯನ್ನು ಪೂರ್ಣಗೊಳಿಸಲಾಗುತ್ತಿದೆ. ನೋಂದಣಿ ಮತ್ತು ಮುದ್ರಾಂಕ ಇಲಾಖೆಯ ಎಲ್ಲಾ ಉಪನೋಂದಣಿ ಕಛೇರಿಗಳನ್ನು ಇ–ಆಡಳಿತ ಇಲಾಖೆ ಒದಗಿಸಿರುವ ಕೆ–ಸ್ವಾನ್ ಅಂತರ್‌ಜಾಲ ವ್ಯವಸ್ಥೆಯ ಮುಖಾಂತರ ಜೋಡಣೆಗೊಳಿಸಲಾಗಿದೆ. ಕೆ–ಸ್ವಾನ್ ಅಂತರ ಜಾಲ ವ್ಯವಸ್ಥೆಯ ಸೇವೆಯು ತೃಪ್ತಿಕರವಾಗಿದ್ದು, ಕಾವೇರಿ ತಂತ್ರಾಂಶದಿಂದ ಸಾರ್ವಜನಿಕರಿಗೆ ಸೇವಾ ಪೂರೈಕೆ ಕಾರ್ಯವು ಸುಗಮವಾಗಿ ನಡೆಯುತ್ತಿದೆ. |
| ಊ | ಸದರಿ ನೋಂದಣಿ ಆಪರೇಟರ್‌ಗಳ ಕೊರತೆಯಿದ್ದು, ಇದಕ್ಕೆ ಸರ್ಕಾರ ಯಾವ ಕ್ರಮ ಕೈಗೊಂಡಿದೆ ಮತ್ತು ಹಳೆಯ ಕಂಪ್ಯೂಟರ್‌ಗಳಿಗೆ ಹೊಸ ತಂತ್ರಾಂಶ ಅಳವಡಿಸಲು ಸಾಧ್ಯವಾಗದೆ ತೊಂದರೆ ಅನುಭವಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಎಲ್ಲಾ ಉಪ ನೋಂದಣಾಧಿಕಾರಿ ಕಛೇರಿಗಳಿಗೆ ಹೊಸ ಕಂಪ್ಯೂಟರ್‌ಗಳನ್ನು ನೀಡಿ ಹೊಸ ತಂತ್ರಾಂಶವನ್ನು ಅಳವಡಿಸಲಾಗಿದೆಯೇ? | ಉಪ ನೋಂದಣಿ ಕಛೇರಿಗಳಲ್ಲಿ ದಸ್ತಾವೇಜುಗಳು ನೋಂದಣಿಯಾಗುವ ಪ್ರಮಾಣದ ಅನುಸಾರ ನೋಂದಣಿ ಆಪರೇಟರ್‌ಗಳನ್ನು ನಿಯೋಜಿಸಲಾಗಿದೆ. ಪ್ರಸ್ತುತ ಕಾವೇರಿ ತಂತ್ರಾಂಶದಲ್ಲಿ ಕಾರ್ಯನಿರ್ವಹಿಸುತ್ತಿದ್ದು, ನೋಂದಣಿ ಕಾರ್ಯವು ಸರಾಗವಾಗಿ ನಡೆಯುತ್ತಿರುತ್ತದೆ.<br><br>ಎಲ್ಲಾ ಉಪ ನೋಂದಣಾಧಿಕಾರಿ ಕಛೇರಿಗಳಿಗೆ ಹೊಸ ಕಂಪ್ಯೂಟರ್ ನೀಡುವ ಸಂಬಂಧ ಟೆಂಡರ್ ಪ್ರಕ್ರಿಯೆಯು ಪರಿಶೀಲನೆಯಲ್ಲಿರುತ್ತದೆ. |

ಸಂಖ್ಯೆ: ಕಂಇ/57/ಎಂಎನ್‌ಎಸ್‌ಎ/2020

(ಆರ್.ಅಶೋಕ್)
ಕಂದಾಯ ಸಚಿವರು